

# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1142 |
| ಉತ್ತರಿಸಬೇಕಾದ ದಿನಾಂಕ | : | 22.09.2021. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪಶುಸಂಗೋಪನಾ ಇಲಾಖೆಯ ಅಧೀನದಲ್ಲಿ ಬರುವ ನಿಗಮ ಮಂಡಳಿಗಳಾವುವು; ಈ ನಿಗಮ ಮಂಡಳಿಗಳ ಕಾರ್ಯವೈಖರಿಗಳೇನು; | **1. ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಹೆಬ್ಬಾಳ ಬೆಂಗಳೂರು.**<br>ನಿಗಮದ ಕಾರ್ಯವೈಖರಿಗಳು:<br>ಅ) ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆಯಡಿ ಕುರಿ/ಮೇಕೆ ಸಾಕಾಣಿಕೆಗೆ ಆರ್ಥಿಕ ನೆರವು.<br>ಆ) ಕುರಿಗಾರರಿಗೆ ಪರಿಕರಗಳ ಕಿಟ್ ವಿತರಣೆ.<br>ಇ) ರಾಷ್ಟ್ರೀಯ ಜಾನುವಾರು ಮಿಷನ್ (NLM) ಯೋಜನೆಯಡಿಯಲ್ಲಿ ಬಂಡೂರು ತಳಿ ಅಭಿವೃದ್ಧಿ ಯೋಜನೆ<br>ಈ) ಸಹಕಾರ ಸಂಘಗಳಲ್ಲಿ ಉಣ್ಣೆ ಮತ್ತು ಚರ್ಮ ಸಂಗ್ರಹಣಾ ಗೋದಾಮುಗಳ ನಿರ್ಮಾಣಕ್ಕೆ ಆರ್ಥಿಕ ನೆರವು<br>ಉ) ಸಂಚಾರಿ ಮಾಂಸ ಮಾರಾಟ ಮಳಿಗೆ ಸ್ಥಾಪನೆಗೆ ಆರ್ಥಿಕ ನೆರವು.<br>ಊ) ಸಂಕಷ್ಟದಲ್ಲಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳಿಗೆ ಒಂದಾವರ್ತಿ ಪ್ರೋತ್ಸಾಹಧನ ನೀಡುವುದು.<br>ಋ) ಕುರಿ/ಮೇಕೆ ತಳಿ ಅಭಿವೃದ್ಧಿಗಾಗಿ ನಿಗಮ ವ್ಯಾಪ್ತಿಯ ಕ್ಷೇತ್ರಗಳಿಂದ ಸಂವರ್ಧನೆಗಾಗಿ ರಿಯಾಯಿತಿ ದರದಲ್ಲಿ ಗಂಡು ಮರಿಗಳ ವಿತರಣೆ.<br>ೠ) ಅನುಗ್ರಹ ಕೊಡುಗೆ ಯೋಜನೆಯಡಿಯಲ್ಲಿ ಆಕಸ್ಮಿಕ ಕುರಿ/ಮೇಕೆಗಳ ಮರಣಕ್ಕೆ ಪರಿಹಾರಧನ ನೀಡುವುದು.<br>ಎ) ರಾಜ್ಯದ ಕುರಿ/ಮೇಕೆಗಳಿಗೆ ಜಂತುನಾಶಕ ಔಷಧಿ ಪೂರೈಕೆ<br>ಏ) ಕುರಿಗಾರರಿಗೆ ವೈಜ್ಞಾನಿಕ ತರಬೇತಿ ಶಿಬಿರ ನೀಡುವುದು<br>ಐ) ಕುರಿ ಮತ್ತು ಮೇಕೆಗಳ ಸಹಕಾರ ಸಂಘಗಳ ಸ್ಥಾಪನೆಗೆ ಸಹಕಾರ ನೀಡುವುದು.<br>**2. ಕರ್ನಾಟಕ ಪಶುವೈದ್ಯಕೀಯ ಪರಿಷತ್ತು**<br>ಪಶುವೈದ್ಯಕೀಯ ಮಹಾವಿಶ್ವವಿದ್ಯಾಲಯಗಳಲ್ಲಿ ಪದವಿಯನ್ನು ಪಡೆದ ಅಭ್ಯರ್ಥಿಗಳಿಗೆ ನೊಂದಾಣಿ ಮಾಡಿಕೊಡುವ ಮತ್ತು ನವೀಕರಣ ಮಾಡಿಕೊಡುವುದು ಹಾಗೂ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಪಶುವೈದ್ಯಾಧಿಕಾರಿಗಳಿಗೆ (ತಾಂತ್ರಿಕ ಅಧಿಕಾರಿ) ಪಶು ವಿಜ್ಞಾನಕ್ಕೆ ಸಂಬಂಧಿಸಿದಂತೆ ತರಬೇತಿಗಳನ್ನು ನೀಡುವುದು. |

**3. ಕರ್ನಾಟಕ ಸಹಕಾರ ಕುರಿ ಮತ್ತು ಮೇಕೆ ಸಾಕಾಣಿಕೆದಾರರ ಸಂಘಗಳ ಮಹಾಮಂಡಳ**

ಕರ್ನಾಟಕ ಸಹಕಾರ ಕುರಿ ಮತ್ತು ಮೇಕೆ ಸಾಕಾಣಿಕೆದಾರರ ಸಂಘಗಳ ಮಹಾಮಂಡಳ ಸದ್ಯಸರಲ್ಲಿ ಮಿತವ್ಯಯ, ಸ್ವ-ಸಹಾಯ ಮತ್ತು ಸಹಕಾರ ಮನೋಭಾವನೆಗಳನ್ನು ಮೂಡಿಸುವುದು. ರಾಜ್ಯದಲ್ಲಿರುವ ಆಡು ಮತ್ತು ಕುರಿ ಸಾಕಾಣಿಕೆದಾರರ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಮತ್ತು ಪುನರುತ್ಥಾನಕ್ಕಾಗಿ ಶ್ರಮಿಸುವುದು.

**4. ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳ ನಿಯಮಿತ**

ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳನಿಯ ಮಿತವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ನಿಯಮ 1960 ರಡಿ ನೋಂದಣಿ ಸಂಖ್ಯೆ:ಓಟಿಎಸ್:144/ ಹೆಚ್‌ಓಟಿ / 94-95, ದಿನಾಂಕ:15.3.1995 ರಂದು ನೋಂದಾಯಿಸಲ್ಪಟ್ಟಿದೆ.

ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳ.ನಿ, ಬೆಂಗಳೂರು ಕಛೇರಿಯು ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯ ಅಧೀನದಲ್ಲಿ ಒಂದು ಅಂಗಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ.

- ಸಹಕಾರಿ ತತ್ವದ ಆಧಾರದ ಮೇಲೆ ಕುಕ್ಕುಟ ಉದ್ದಿಮೆಯನ್ನು ಅಭಿವೃದ್ಧಿಪಡಿಸಲು ಪ್ರೋತ್ಸಾಹಿಸುವುದು.
- ಕುಕ್ಕುಟ ಉದ್ದಿಮೆಯನ್ನು ಒಂದು ಆರ್ಥಿಕ ಉದ್ದಿಮೆಯನ್ನಾಗಿ ಯೋಜಿಸಿ ಸಮನ್ವಯಗೊಳಿಸುವುದು.
- ಗ್ರಾಮೀಣ ಪ್ರದೇಶದ ಜನರಲ್ಲಿ ಸಹಕಾರ ತತ್ವಗಳನ್ನು ತಮ್ಮದೇ ಚಳುವಳಿ ಎಂಬಂತೆ ಅಳವಡಿಸಿಕೊಳ್ಳಲು ಉತ್ತೇಜಿಸುವುದು.
- ಗ್ರಾಮೀಣ ನಿರುದ್ಯೋಗಿ ಯುವಕರಿಗೆ ಜೀವನೋಪಾಯ ಹಾಗೂ ನಿರಂತರ ಆದಾಯ ದೊರೆಯುವಂತೆ ಸಹಕಾರ ತತ್ವದ ಆಧಾರದ ಮೇಲೆ ಕುಕ್ಕುಟ ಉದ್ದಿಮೆಯನ್ನು ಬೆಳೆಸುವುದು.
- ಕೋಳಿ ಮೊಟ್ಟೆಗಳು, ಕೋಳಿ ಮಾಂಸ ಹಾಗೂ ಅವುಗಳ ಉತ್ಪನ್ನಗಳ ಉತ್ಪಾದನೆ, ಸಂಸ್ಕರಣೆ, ಶೇಖರಣೆ, ಸಾಗಾಣಿಕೆ ಹಾಗೂ ಮಾರುಕಟ್ಟೆಯನ್ನು ಉತ್ತೇಜಿಸಲು ಕ್ರಮಗಳನ್ನು ಕೈಗೊಂಡು ಕೋಳಿ ಸಾಕಣೆದಾರರ ಆರ್ಥಿಕ ಸಬಲೀಕರಣ ಮಾಡುವುದು.
- ಕುಕ್ಕುಟಗಳ ತಳಿ ಅಭಿವೃದ್ಧಿ, ಗುಣಮಟ್ಟದ ಆಹಾರ ಉತ್ಪಾದನೆ ಹಾಗೂ ಕುಕ್ಕುಟೋದ್ಯಮದ ಅಭಿವೃದ್ಧಿ ಕಾರ್ಯಗಳಿಗೆ ಪೂರಕವಾಗಿ ಪ್ರೋತ್ಸಾಹದಾಯಕ ಚಟುವಟಿಕೆಗಳನ್ನು ಕೈಗೊಳ್ಳುವುದು.
- ಮೊಟ್ಟೆ, ಮಾಂಸ ಹಾಗೂ ಅವುಗಳ ಉತ್ಪನ್ನಗಳ ಬಳಕೆ ಹಾಗೂ ಉಪಯೋಗಗಳ ಬಗ್ಗೆ ಗ್ರಾಹಕರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.
- ಸಹಕಾರ ಕ್ಷೇತ್ರದಡಿ ಇತರೆ ಆರ್ಥಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು. ಕುಕ್ಕುಟೋದ್ಯಮದ ಅಭಿವೃದ್ಧಿಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಪುರಸ್ಕೃತ ಯೋಜನೆ/ಯೋಜನೇತರ ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ನೀಡಲಾಗುವ ಸರ್ಕಾರಿ ಆದೇಶಗಳ ಮೇರೆಗೆ ಅನುಷ್ಠಾನಗೊಳಿಸುವುದು.

| | | |
|---|---|---|
| | | **5. ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿ ನಿಯಮಿತ**<br><br>ಕರ್ನಾಟಕ ಹಾಲು ಮಹಾಮಂಡಳಿಯು ರಾಜ್ಯ ಮಟ್ಟದ ಸಹಕಾರ ಶೃಂಗ ಸಂಸ್ಥೆಯಾಗಿದ್ದು, ತನ್ನ ವ್ಯಾಪ್ತಿಯಡಿ ಬರುವ 14 ಸದಸ್ಯ ಜಿಲ್ಲಾ ಹಾಲು ಒಕ್ಕೂಟಗಳ ಮೂಲಕ ರಾಜ್ಯದ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಥಮಿಕ ಹಾಲು ಉತ್ಪಾದಕರ ಸಹಕಾರ ಸಂಘಗಳ ಮೂಲಕ ಹಾಲು ಉತ್ಪಾದಕರು ಉತ್ಪಾದಿಸಿ ಸರಬರಾಜು ಮಾಡುವ ಹಾಲಿಗೆ ಮಾರುಕಟ್ಟೆಯನ್ನು ಒದಗಿಸುವುದು, ಸಕಾಲದಲ್ಲಿ ಬಟವಾಡೆ ಮಾಡುವುದು, ಹಾಲು ಉತ್ಪಾದನೆ ಹೆಚ್ಚಿಸಲು ಅವಶ್ಯಪೂರಕ ಸೌಲಭ್ಯವನ್ನು ಒದಗಿಸುವುದು, ನಿರಂತರ ಹಾಲು ಉತ್ಪಾದಕರ ಸಮಗ್ರ ಅಭಿವೃದ್ಧಿಗೆ ಕ್ರಮಕೈಗೊಳುತ್ತಿದೆ.<br><br>ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನರಿಗೆ ಆರೋಗ್ಯಕರ, ಸುರಕ್ಷಿತ ಮತ್ತು ಗುಣಮಟ್ಟದ ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಸಕಾಲಕ್ಕೆ ಗೋವಿನಿಂದ -ಗ್ರಾಹಕರಿಗೆ ಸರಬರಾಜು ಮಾಡುವ ಉದ್ದೇಶ ಹೊಂದಿರುತ್ತದೆ. |
| ಆ | ಕಳೆದ 2 ವರ್ಷಗಳಿಂದ ಕೈಗೊಂಡಿರುವ ಯೋಜನೆಗಳಾವುವು; ಪ್ರಸ್ತುತ ಸಾಲಿನಲ್ಲಿ ಸೃಜಿಸಿರುವ ಯಾವ ಯಾವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ? (ವಿವರ ನೀಡುವುದು) | ಕಳೆದ ಎರಡು ವರ್ಷಗಳಿಂದ ಕೈಗೊಂಡಿರುವ ಯೋಜನೆಗಳು:<br><br>**1. ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಹೆಬ್ಬಾಳ ಬೆಂಗಳೂರು.**<br><br>ಅ) ವಿಶೇಷ ಘಟಕ ಯೋಜನೆ / ಗಿರಿಜನ ಉಪಯೋಜನೆಯಡಿ ಕುರಿ / ಮೇಕೆ ಸಾಕಾಣಿಕೆಗೆ ಆರ್ಥಿಕ ನೆರವು.<br><br>ಆ) ಕುರಿಗಾರರಿಗೆ ಪರಿಕರಗಳ ಕಿಟ್ ವಿತರಣೆ<br><br>ಇ) ರಾಷ್ಟ್ರೀಯ ಜಾನುವಾರು ಮಿಷನ್ (NLM) ಯೋಜನೆಡಿಯಲ್ಲಿ ಬಂಡೂರು ತಳಿ ಅಭಿವೃದ್ಧಿ ಯೋಜನೆ<br><br>ಈ) ಸಹಕಾರ ಸಂಘಗಳಲ್ಲಿ ಉಣ್ಣೆ ಮತ್ತು ಚರ್ಮ ಸಂಗ್ರಹಣಾ ಗೋದಾಮುಗಳ ನಿರ್ಮಾಣಕ್ಕೆ ಆರ್ಥಿಕ ನೆರವು<br><br>ಉ) ಸಂಚಾರಿ ಮಾಂಸ ಮಾರಾಟ ಮಳಿಗೆ ಸ್ಥಾಪನೆಗೆ ಆರ್ಥಿಕ ನೆರವು.<br><br>ಊ) ಸಂಕಷ್ಟದಲ್ಲಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳಿಗೆ ಒಂದಾವರ್ತಿ ಪ್ರೋತ್ಸಾಹಧನ ನೀಡುವುದು.<br><br>ಋ) ಕುರಿ / ಮೇಕೆ ತಳಿ ಅಭಿವೃದ್ಧಿಗಾಗಿ ನಿಗಮ ವ್ಯಾಪ್ತಿಯ ಕ್ಷೇತ್ರಗಳಿಂದ ಸಂವರ್ಧನೆಗಾಗಿ ರಿಯಾಯಿತಿ ದರದಲ್ಲಿ ಗಂಡು ಮರಿಗಳ ವಿತರಣೆ .<br><br>ಋ) ಅನುಗ್ರಹ ಕೊಡುಗೆ ಯೋಜನೆಯಡಿಯಲ್ಲಿ ಆಕಸ್ಮಿಕ ಕುರಿ / ಮೇಕೆಗಳ ಮರಣಕ್ಕೆ ಪರಿಹಾರಧನ ನೀಡುವುದು. |

| | | |
|---|---|---|
| | | ಎ) ರಾಜ್ಯದ ಕುರಿ/ ಮೇಕೆಗಳಿಗೆ ಜಂತುನಾಶಕ ಔಷಧಿ ಪೂರೈಕೆ<br><br>ಏ) ಕುರಿಗಾರರಿಗೆ ವೈಜ್ಞಾನಿಕ ತರಬೇತಿ ಶಿಬಿರ ನೀಡುವುದು<br><br>ಐ) ಕುರಿ ಮತ್ತು ಮೇಕೆಗಳ ಸಹಕಾರ ಸಂಘಗಳ ಸ್ಥಾಪನೆಗೆ ಸಹಕಾರ ನೀಡುವುದು.<br><br>ಪ್ರಸ್ತುತ 2021-22ನೇ ಸಾಲಿನಲ್ಲಿ ಕೆಳಕಂಡ ಕಾರ್ಯಕ್ರಮ/ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ:<br><br>ಅ)ಕೊಪ್ಪಳ ಜಿಲ್ಲೆಯಲ್ಲಿ ನಾರಿ ಸುವರ್ಣ ಕುರಿ ಸಂವರ್ಧನ ಕೇಂದ್ರ ಸ್ಥಾಪನೆ. (ನೂತನ ಯೋಜನೆ).<br><br>ಆ) ಚಿತ್ರದುರ್ಗ ಜಿಲ್ಲೆಯಲ್ಲಿ ನಂದಿದುರ್ಗ ಮೇಕೆ ಸಂವರ್ಧನ ಕೇಂದ್ರ ಸ್ಥಾಪನೆ. (ನೂತನ ಯೋಜನೆ).<br><br>ಇ) ಕುರಿ/ಮೇಕೆಗಳಿಗೆ ಜಂತುನಾಶಕ ಔಷಧ ಪೂರೈಕೆ.<br><br>ಈ) ಕರ್ನಾಟಕ ರಾಜ್ಯದ ಕುರಿಗಾರರಿಗೆ ವೈಜ್ಞಾನಿಕ ಕುರಿ/ಮೇಕೆ ಸಾಕಾಣಿಕೆಯಲ್ಲಿ ತರಬೇತಿ ಶಿಬಿರಗಳನ್ನು ಆಯೋಜಿಸಿವುದು.<br><br>ಉ) ವಲಸೆ ಕುರಿಗಾರರಿಗೆ ಪರಿಕರ ಕಿಟ್‌ಗಳನ್ನು ನೀಡುವುದು.<br><br>ಊ) ಸಂಕಷ್ಟದಲ್ಲಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳಿಗೆ ಒಂದಾವರ್ತಿ ಪ್ರೋತ್ಸಾಹಧನ ನೀಡುವುದು.<br><br>ಋ) ಸಂಚಾರಿ ಮಾಂಸ ಮಾರಾಟ ಮಳಿಗೆ ಸ್ಥಾಪನೆ.<br><br>ೠ) ರೈತ ಉತ್ಪಾದಕರ ಸಂಸ್ಥೆ ಸ್ಥಾಪಿಸುವುದು (FPO).<br><br>ಎ) ಕುರಿ/ಮೇಕೆ ತಳಿ ಅಭಿವೃದ್ಧಿಗಾಗಿ ನಿಗಮ ವ್ಯಾಪ್ತಿಯ ಕ್ಷೇತ್ರಗಳಿಂದ ಸಂವರ್ಧನೆಗಾಗಿ ರಿಯಾಯಿತಿ ದರದಲ್ಲಿ ಗಂಡು ಮರಿಗಳ ವಿತರಣೆ<br><br>ಏ) ಅನುಗ್ರಹ ಕೊಡುಗೆ ಯೋಜನೆಯಡಿ ಆಕಸ್ಮಿಕ ಕುರಿ/ಮೇಕೆಗಳ ಮರಣಕ್ಕೆ ಪರಿಹಾರಧನ ನೀಡುವುದು.<br><br>ಐ)ಕುರಿ/ಮೇಕೆಗಳಿಗೆ ಜಂತುನಾಶಕ ಔಷಧಿ ಪೂರೈಕೆ<br><br>ಒ) ಕುರಿಗಾರರಿಗೆ ವೈಜ್ಞಾನಿಕ ತರಬೇತಿ ಶಿಬಿರ ನೀಡುವುದು.<br><br>**2. ಕರ್ನಾಟಕ ಪಶುವೈದ್ಯಕೀಯ ಪರಿಷತ್ತು**<br>-ಅನ್ವಯಿಸುವುದಿಲ್ಲ-<br>**3. ಕರ್ನಾಟಕ ಸಹಕಾರ ಕುರಿ ಮತ್ತು ಮೇಕೆ ಸಾಕಾಣಿಕೆದಾರರ ಸಂಘಗಳ ಮಹಾಮಂಡಳ**<br><br>2019-20 ಹಾಗೂ 2020-21ರಲ್ಲಿ ಸರ್ಕಾರದಿಂದ ಯಾವುದೇ ಅನುದಾನ ಹಾಗೂ ಯೋಜನೆಗಳು ಮಂಜೂರಾಗಿರುವುದಿಲ್ಲ. ಆದ್ದರಿಂದ ಯಾವುದೇ ಹೊಸ ಯೋಜನೆಗಳನ್ನು ಹಮ್ಮಿಕೊಂಡಿರುವುದಿಲ್ಲ. |

| | | |
|---|---|---|
| | | **4. ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳ ನಿಯಮಿತ**<br><br>1) 2019-20ನೇ ಸಾಲಿನಲ್ಲಿ ಬಡಕುಟುಂಬಗಳ ಆರ್ಥಿಕ ಸಬಲೀಕರಣ ಮತ್ತು ಸಾರ್ವಜನಿಕ ಪೌಷ್ಠಿಕ ಆಹಾರ ಪೂರೈಸುವ ದೃಷ್ಠಿಯಿಂದ 10000 ಬಡನಿರುದ್ಯೋಗ ಯುವಕ/ಯುವತಿಯರಿಗೆ ರಾಜ್ಯದ ಎಲ್ಲಾ 30 ಜಿಲ್ಲೆಗಳಿಗೆ ನಾಟಿ ಕೋಳಿ ಸಾಕಾಣಿಕೆ ಮಾಡಲು ಪ್ರೋತ್ಸಾಹಿಸುವ ಯೋಜನೆ. ಪ್ರತಿ ತಾಲ್ಲೂಕಿನಲ್ಲಿ ಒಂದು ಅಥವಾ ಎರಡು ಗ್ರಾಮಗಳ 42 ಜನ ಫಲಾನುಭವಿಗಳಿಗೆ 5 ವಾರದ 38 ಅಸೀಲ್‌ಕ್ರಾಸ್ /ನಾಟಿ ಕೋಳಿ ಮರಿಗಳನ್ನು ಉಚಿತವಾಗಿ ಹಿತ್ತಲ ಕೋಳಿ ಸಾಕಾಣಿಕೆಗಾಗಿ ನೀಡಲಾಗಿದೆ.<br><br>2020-21ನೇ ಸಾಲಿನಲ್ಲಿ ಸರ್ಕಾರದಿಂದ ಯಾವುದೇ ಯೋಜನೆಗಳಿಗೆ ಅನುದಾನ ಬಿಡುಗಡೆಯಾಗಿರುವುದಿಲ್ಲ.<br><br>**5. ಕರ್ನಾಟಕ ಹಾಲು ಮಹಾಮಂಡಳದ ಯೋಜನೆಗಳು:**<br><br>1. ಪಶು ಆಹಾರ ಬೇಡಿಕೆ ಅನ್ವಯ ಮಾಹೆಯಾನ 40,000 ಮೆ.ಟನ್ ಒಟ್ಟಾರೆ ಉತ್ಪಾದನಾ ಸಾಮರ್ಥ್ಯವನ್ನು 60,000 ಮೆ. ಟನ್‌ಗಳಿಗೆ ಹೆಚ್ಚಿಸುವ ನಿಟ್ಟಿನಲ್ಲಿ ಧಾರವಾಡದಲ್ಲಿ ಮತ್ತು ಗುಬ್ಬಿಯಲ್ಲಿ ಆಧುನಿಕ ತಂತ್ರಜ್ಞಾನದ ತಲಾ 300 ಮೆ.ಟನ್ ಸಾಮರ್ಥ್ಯದ ಪಶು ಆಹಾರ ಉತ್ಪಾದನಾ ಘಟಕಗಳನ್ನು ಅನುಷ್ಠಾನಗೊಳಿಸಿ, ಕೋವಿಡ್-19 ಸಮಯದಲ್ಲಿ ಉತ್ಪಾದನೆಯನ್ನು ಪ್ರಾರಂಭಿಸಲಾಗಿರುತ್ತದೆ.<br><br>2. ದಕ್ಷಿಣ ಭಾರತದಲ್ಲೇ ಪ್ರಪ್ರಥಮವಾಗಿ ಹಾಸನದ ಮುಖ್ಯ ಡೇರಿಯಲ್ಲಿ ರೂ.150 ಕೋಟಿ ವೆಚ್ಚದಲ್ಲಿ ಯು.ಹೆಚ್.ಟಿ ಸುವಾಸಿತ ಹಾಲನ್ನು ಪೆಟ್ ಬಾಟಲ್‌ನಲ್ಲಿ ಒದಗಿಸುವ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದ್ದು, ಪ್ರಾಯೋಗಿಕ ಚಾಲನೆ ಪ್ರಗತಿಯಲ್ಲಿರುತ್ತದೆ.<br><br>3. ಹಲವು ಸ್ಥಳಗಳಲ್ಲಿ ಯು.ಹೆಚ್.ಟಿ. ಪ್ಯಾಕಿಂಗ್ ಸಾಮರ್ಥ್ಯವನ್ನೂ ಸಹ ಹೆಚ್ಚಿಸಿದ್ದು, ಪ್ರಮುಖವಾಗಿ ಹಾಸನದಲ್ಲಿ 02 ಲಕ್ಷ ಲೀ. ಹಾಗೂ ಕನಕಪುರದಲ್ಲಿ 01 ಲಕ್ಷ ಲೀ. ಸಾಮರ್ಥ್ಯದ ಯು.ಹೆಚ್.ಟಿ. ಘಟಕಗಳನ್ನು ಸ್ಥಾಪಿಸಲಾಗಿರುತ್ತದೆ.<br><br>4. ಶಿವಮೊಗ್ಗ ಹಾಲು ಒಕ್ಕೂಟಕ್ಕಾಗಿ ಶಿವಮೊಗ್ಗ ಮುಖ್ಯ ಡೇರಿ ಆವರಣದಲ್ಲಿ ರೂ.35 ಕೋಟಿ ವೆಚ್ಚದಲ್ಲಿ ನೂತನ ಹಾಲು ಪ್ಯಾಕಿಂಗ್ ಘಟಕವನ್ನು ಅನುಷ್ಠಾನಗೊಳಿಸಲಾಗಿದೆ.<br><br>5. ಕಹಾಮದಲ್ಲೇ ಪ್ರಪ್ರಥಮವಾಗಿ ಬೆಂಗಳೂರಿನ ಹೆಸರ ಘಟ್ಟದಲ್ಲಿ ಹೈಟೆಕ್ ಬುಲ್ ಮದರ್ ಫಾರಂ ಯೋಜನೆಯನ್ನುಅನುಷ್ಠಾನಗೊಳಿಸಲಾಗಿದೆ.<br><br>ಪ್ರಸ್ತುತ ಪ್ರಗತಿಯಲ್ಲಿರುವ ಯೋಜನೆಗಳು:<br><br>• ಬೆಳಗಾವಿ ಜಿಲ್ಲೆ ರಾಯಭಾಗದಲ್ಲಿ ರೂ.10 ಕೋಟಿ ವೆಚ್ಚದಲ್ಲಿ 1ಲಕ್ಷ ಲೀ. ಸಾಮರ್ಥ್ಯದ ಹಾಲು ಶೀಥಲೀಕರಣ ಘಟಕ ಸ್ಥಾಪನೆ ಯೋಜನೆಯು ಅಂತಿಮ ಹಂತದಲ್ಲಿರುತ್ತದೆ. |

- ಧಾರವಾಡ ಹಾಲು ಒಕ್ಕೂಟಕ್ಕಾಗಿ ಹಾವೇರಿ ಜಿಲ್ಲೆಯ ಜಂಗಮಕೊಪ್ಪ ಗ್ರಾಮದಲ್ಲಿರುವ ಹಾವೇರಿ ಶೀಥಲೀಕರಣ ಕೇಂದ್ರದ ಆವರಣದಲ್ಲಿ ದಿನವಹಿ 1-1.5ಲಕ್ಷ ಲೀ. ಸಂಸ್ಕರಣಾ ಡೇರಿ ಹಾಗೂ ಯು.ಹೆಚ್.ಟಿ. ಘಟಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.
- ಹಾಸನ ಹಾಲು ಒಕ್ಕೂಟಕ್ಕಾಗಿ ದಿನವಹಿ 10-15ಲಕ್ಷ ಲೀ. ಸಾಮರ್ಥ್ಯದ ಮೆಗಾಡೇರಿ ಮತ್ತು 60ಮೆ.ಟನ್ ಸಾಮರ್ಥ್ಯದ ಹಾಲು ಪುಡಿ ಘಟಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಸಿವಿಲ್ ಕೆಲಸಗಳು ಪ್ರಗತಿಯಲ್ಲಿರುತ್ತದೆ.

**ರಾಜ್ಯ ಸರ್ಕಾರದ ಯೋಜನೆಗಳು:**

ಕ್ಷೀರ ಧಾರೆ ಯೋಜನೆ: ಈ ಯೋಜನೆಯಡಿ ಹಾಲು ಉತ್ಪಾದಕರಿಗೆ ಪ್ರತಿ ಲೀ. ಗುಣಮಟ್ಟದ ಹಾಲು ಸರಬರಾಜಿಗೆ ರೂ.5/- ಪ್ರೋತ್ಸಾಹಧನ ನೀಡಲಾಗುತ್ತಿದೆ. 2019-20 ಮತ್ತು 2020-21ನೇ ಸಾಲಿನಲ್ಲಿ ಹಾಲು ಪ್ರೋತ್ಸಾಹಧನ ಪಾವತಿ ಮಾಡಿರುವ ವಿವರಗಳು ಕೆಳಕಂಡಂತಿದೆ.

**(ರೂ.ಲಕ್ಷಗಳಲ್ಲಿ)**

| ಕ್ರ ಸಂ. | ವರ್ಷ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟುಮೊತ್ತ |
|---|---|---|---|---|---|
| 1 | 2019-20 | 114297.70 | 7337.43 | 4447.09 | 126082.22 |
| 2 | 2020-21 | 107005.31 | 7304.47 | 4276.70 | 118586.48 |

ಕ್ಷೀರ ಭಾಗ್ಯ ಯೋಜನೆ:ಕರ್ನಾಟಕ ಸರ್ಕಾರ ರೈತರ ಹಿತದೃಷ್ಟಿಯನ್ನು ಕಾಪಾಡಲು ಹಾಗೂ ಮಕ್ಕಳ ಆರೋಗ್ಯ ಸುಧಾರಣೆ ಮತ್ತು ಅಪೌಷ್ಟಿಕ ನಿವಾರಣೆಯ ಸಾಮಾಜಿಕ ಕಾಳಜಿಯೊಂದಿಗೆ ಮಹತ್ವಾಕಾಂಕ್ಷಿ ಯೋಜನೆಯಾದ "ಕ್ಷೀರ ಭಾಗ್ಯ ಯೋಜನೆ" ಯು ದಿನಾಂಕ: 01.08.2013 ರಂದು ರಾಜ್ಯಾದ್ಯಾಂತ ಪ್ರಾರಂಭಗೊಂಡಿರುತ್ತದೆ.

ಈ ಯೋಜನೆಯಂತೆ 55683 ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿನ 1 ರಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ 64 ಲಕ್ಷ ವಿದ್ಯಾರ್ಥಿಗಳಿಗೆ ಒಂದು ಬಾರಿಗೆ 18 ಗ್ರಾಂ ಕೆನೆಭರಿತ ಹಾಲಿನ ಪುಡಿಯಿಂದ ತಯಾರಿಸಿದ 150 ಮಿ.ಲೀ ಹಾಲನ್ನು ಶಿಕ್ಷಣ ಇಲಾಖೆ ವತಿಯಿಂದ ಹಾಗೂ 64000 ಅಂಗನವಾಡಿಗಳಲ್ಲಿ 6 ತಿಂಗಳಿಂದ 6 ವರ್ಷದವರೆಗಿನ 39.50 ಲಕ್ಷ ಅಂಗನವಾಡಿ ಮಕ್ಕಳಿಗೆ ಪ್ರತಿ ಮಗುವಿಗೆ ಒಂದು ಬಾರಿಗೆ 15ಗ್ರಾಂ ಕೆನೆ ಭರಿತ ಹಾಲಿನ ಪುಡಿಯಿಂದ ತಯಾರಿಸಿದ 150ಮಿ.ಲೀ ಹಾಲನ್ನು ಮಹಿಳಾ ಮತ್ತು ಮಕ್ಕಳ ಇಲಾಖೆಯ ವತಿಯಿಂದ ವಾರದಲ್ಲಿ 5 ದಿನ ಪ್ರತಿ ಮಗುವಿಗೆ ವಿತರಿಸಲಾಗುತ್ತಿದೆ.

2019–20 ಮತ್ತು 2020–21ನೇ ಸಾಲಿನಲ್ಲಿ ಸರಬರಾಜು ಮಾಡಿದ ವಿವರ ಈ ಕೆಳಕಂಡಂತಿದೆ.

| ಕ್ರಸಂ | ವರ್ಷ | ಸರಬರಾಜು ಮಾಡಿದ ಹಾಲಿನಪುಡಿ ಪ್ರಮಾಣ ಮೆ.ಟನ್ | ಮೊತ್ತ ರೂ.ಕೋಟಿಗಳಲ್ಲಿ |
|---|---|---|---|
| 1 | 2019–20 ಮತ್ತು 2020–21 | 59482 | 1626 |

**ಕೇಂದ್ರ ಸರ್ಕಾರದ ಯೋಜನೆ:**

ಕೇಂದ್ರ ಸರ್ಕಾರದ Dairy Processing and Infrastructure Development Fund (DIDF) ಮೂಲಕ 2019–20ನೇ ಸಾಲಿನಲ್ಲಿ ಕರ್ನಾಟಕ ಹಾಲು ಮಹಾಮಂಡಳಿ ಮತ್ತು ಒಕ್ಕೂಟಗಳಿಗೆ ಈ ಕೆಳಕಂಡ ಅನುದಾನವನ್ನು ಮಂಜೂರು ಮಾಡಿದ್ದು, ವಿವರ ಈ ಕೆಳಕಂಡಂತಿರುತ್ತದೆ.

(ರೂ.ಲಕ್ಷಗಳಲ್ಲಿ)

| ಕ್ರಸಂ | ಕಹಾಮ/ಒಕ್ಕೂಟ | ಮಂಜೂರಾತಿ ಮೊತ್ತ | ಬಿಡುಗಡೆ ಮೊತ್ತ | ಬಳಕೆ |
|---|---|---|---|---|
| 1 | ಬೆಂಗಳೂರು | 19,999.19 | 19,139,06 | 19,139,06 |
| 2 | ದಕ್ಷಿಣ ಕನ್ನಡ | 5,499.92 | 5,094.48 | 5,094.48 |
| 3 | ಹಾಸನ | 13,533.00 | 0 | 0 |
| 4 | ಕರ್ನಾಟಕಹಾಲು ಮಹಾ ಮಂಡಳ, ರಾಮನಗರ | 21,000,00 | 19,854.00 | 19,854.00 |
| 5 | ಕರ್ನಾಟಕ ಹಾಲು ಮಹಾ ಮಂಡಳ, ಚನ್ನರಾಯ ಪಟ್ಟಣ | 8,752.62 | 8,295.54 | 8,295.54 |
| 6 | ಕೋಲಾರ | 10,317.83 | 8,393.70 | 8,393.70 |
| 7 | ಮೈಸೂರು | 8,034.00 | 6.387.06 | 6.387.06 |
| 8 | ಚಾಮರಾಜ ನಗರ | 5,999.98 | 4,583.33 | 4,583.33 |

ಎನ್.ಪಿ.ಡಿ.ಡಿ. ಯೋಜನೆ:– 2019–20ನೇ ಸಾಲಿನಲ್ಲಿ ಕರ್ನಾಟಕ ಹಾಲು ಮಹಾಮಂಡಳಿಗೆ Central State Laboratory ಹಾಗೂ ಮತ್ತು 17 FTIR Technology base milk analyzer ಒಕ್ಕೂಟ / ಘಟಕಗಳಲ್ಲಿ ಅಳವಡಿಸಲು ಒಟ್ಟು ರೂ.2245.00 ಲಕ್ಷ ಬಿಡುಗಡೆಯಾಗಿದ್ದು, ಯೋಜನೆಯನ್ನು ಅನುಷ್ಠಾನಗೊಳಿಸಲಾಗಿರುತ್ತದೆ.

2019–20ನೇ ಸಾಲಿನಲ್ಲಿ ಗದಗ ಜಿಲ್ಲೆಯನ್ನು Aspiration ಪ್ರದೇಶವೆಂದು ಘೋಷಿಸಿದ್ದು, ರೂ.233.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಯೋಜನೆಯು ಪ್ರಗತಿಯಲ್ಲಿರುತ್ತದೆ.

| | | |
|---|---|---|
| | | 2020–21ನೇ ಸಾಲಿಗೆ ಕರ್ನಾಟಕ ಹಾಲು ಮಹಾಮಂಡಳಿ ವ್ಯಾಪ್ತಿಯಲ್ಲಿನ ಒಕ್ಕೂಟಗಳಲ್ಲಿ 265 ಸಂಖ್ಯೆಯ ಬಿ.ಎಂ.ಸಿ. ಮತ್ತು AMCU with EMAT ಗಳನ್ನು ಅಳವಡಿಸಲು ಕೇಂದ್ರ ಸರ್ಕಾರದಿಂದ ಶೇ.50ರಷ್ಟು ಅನುದಾನದ ಮೊತ್ತ ರೂ.4185.0 ಲಕ್ಷ ಮಂಜೂರಾಗಿದ್ದು, ಅದರಲ್ಲಿ ಮೊದಲನೇ ಕಂತಾಗಿ ರೂ.2089 ಲಕ್ಷ ಬಿಡುಗಡೆಯಾಗಿರುತ್ತದೆ. ಮಾರ್ಗಸೂಚಿಯಂತೆ Government e-marketing (Gem) portal ಮುಖೇನ ಖರೀದಿಸಲಾಗಿರುತ್ತದೆ. ಕಾರ್ಯಕ್ರಮ ಪ್ರಗತಿಯಲ್ಲಿದೆ. |

**ಪಸಂಮೀ ಇ–250 ಸಲೆವಿ 2021**

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು,